ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ಶಿವಮೊಗ್ಗ ಮಹಾನಗರ ಪಾಲಿಕೆ ವಾರ್ಡ್ ಸಮಿತಿ ಹಾಗೂ ಏರಿಯಾ ಸಭೆಗಳ ಬಗ್ಗೆ

ಶ್ರೀ ಆಯನೂರು ಮಂಜುನಾಥ್ (ಪದವೀಧರರ ಕ್ಷೇತ್ರ):-

361 (441) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶಿವಮೊಗ್ಗ ಮಹಾನಗರ ಪಾಲಿಕೆಯ ಮಹಾನಗರ ಪಾಲಿಕೆ ಕಾಯ್ದೆ ಅನ್ವಯ ವಾರ್ಡ್ ಸಮಿತಿ ಹಾಗೂ ಏರಿಯಾ ಸಭೆಗಳು ರಚನೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಯಾವಾಗ ರಚಿಸಲಾಗುವುದು ;

(ಆ) ಶಿವಮೊಗ್ಗ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಅಗ್ನಿಶಾಮಕ ಇಲಾಖೆಯಿಂದ ಅನುಮತಿ ಪಡೆಯದ ದೊಡ್ಡಕಟ್ಟಡಗಳು ಹಾಗೂ ನಕ್ಷೆಯಲ್ಲಿ ಪಾರ್ಕಿಂಗ್ ಎಂದು ತೋರಿಸಿ ಕಾನೂನು ಬಾಹಿರವಾಗಿ ವಾಣಿಜ್ಯ ವ್ಯವಹಾರ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಆ ಎಲ್ಲಾ ಕಟ್ಟಡಗಳ ವಿವರವಾದ ಮಾಹಿತಿಯನ್ನು ನೀಡುವುದು ;

(ಇ) ಕಾನೂನು ಉಲ್ಲಂಘಿಸಿ ಕಟ್ಟಡ ನಿರ್ಮಿಸಿ ವ್ಯವಹರಿಸುತ್ತಿರುವ ಕಟ್ಟಡ ಮಾಲೀಕರ ಮೇಲೆ ಯಾವ ಕ್ರಮ ಕೈಗೊಳ್ಳಲಾಗುವುದು ಮತ್ತು ಯಾವಾಗ ?